ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಬುಧವಾರ, ದಿನಾಂಕ : 11 ನೇ ಮಾರ್ಚ್, 2020

ಜಲಾನಯನ ಅಭಿವೃದ್ದಿ ಯೋಜನೆಗಳ ಬಗ್ಗೆ

ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) -

105 (844) ಮಾನ್ಯ ಕೃಷಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ಕಳೆದ 3 ವರ್ಷಗಳಿಂದ ಮಂಡ್ಯ ಜಿಲ್ಲೆವ್ಯಾಪ್ತಿಯಲ್ಲಿ ಕೃಷಿ ಇಲಾಖೆ ವ್ಯಾಪ್ತಿಯ ಜಲಾನಯನ ಅಭಿವೃದ್ದಿ ಯೋಜನೆಯಡಿ ಒಟ್ಟು ಎಷ್ಟು ತಡೆಗೋಡೆ /ಚೆಕ್‌ಡ್ಯಾಂಗಳ ನಿರ್ಮಾಣ ಮಾಡಲಾಗಿದೆ ; ಒಂದು ಘಟಕಕ್ಕೆ/ಚೆಕ್‌ಡ್ಯಾಂ ನಿರ್ಮಾಣ ಮಾಡಲು ನಿಗಧಿ ಮಾಡಿರುವ ಮೊತ್ತವೆಷ್ಟು ;

(ಆ) ತಡೆಗೋಡೆ/ಚೆಕ್‌ಡ್ಯಾಂ ನಿರ್ಮಾಣ ಮಾಡಲು ನಿಗಧಿಪಡಿಸಿರುವ ಮಾನದಂಡಗಳೇನು; (ಜಾಗ ಗುರುತಿಸುವುದು ಅಂದಾಜುಪಟ್ಟಿ ತಯಾರಿ ಮಾಡುವ ಅಧಿಕಾರಿಗಳು ಯಾರು ; ಪೂರ್ಣ ಮಾಹಿತಿ ನೀಡುವುದು)

(ಇ) ಸದರಿ ತಡೆಗೋಡೆ/ಚೆಕ್‌ಡ್ಯಾಂಗಳನ್ನು ನಿರ್ಮಾಣ ಮಾಡಲು ಟೆಂಡರ್ ಕರೆಯಲಾಗಿದೆಯೇ ; ಕಳೆದ ಮೂರು ವರ್ಷಗಳಲ್ಲಿ ಟೆಂಡರ್ ಕರೆದಿರುವ ಮಾಹಿತಿ ಮತ್ತು ವರ್ಕ್ ಆರ್ಡರ್ ನೀಡಿರುವ ಪ್ರತಿ ನೀಡುವುದು ;

(ಈ) ಈ ಕಾಮಗಾರಿಯನ್ನು 2019-20ನೇ ಸಾಲಿನಲ್ಲಿ ಸಹಾಯಕ ನಿರ್ದೇಶಕರು ಕೃಷಿ ಇಲಾಖೆ, ನಾಗಮಂಗಲ, ಇವರು ಟೆಂಡರ್ ಕರೆಯದೆ ಬೇಕಾದವರಿಗೆ ವರ್ಕ್ ಆರ್ಡರ್ ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಈ ಬಗ್ಗೆ ಸಂಬಂಧಪಟ್ಟ ಅಧಿಕಾರಿಯ ಮೇಲೆ ತೆಗೆದುಕೊಂಡ ಕ್ರಮಗಳೇನು?